# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆಗುರುತಿಲ್ಲದ ಪ್ರಶ್ನೆ ಸಂಖ್ಯೆ : 959
ಸದಸ್ಯರ ಹೆಸರು : ಶ್ರೀ ಎಸ್.ಎಲ್ ಭೋಜೇಗೌಡ (ಶಿಕ್ಷಕರ ಕ್ಷೇತ್ರ)
ಉತ್ತರಿಸಬೇಕಾದ ದಿನಾಂಕ : 15.03.2021
ಉತ್ತರಿಸುವ ಸಚಿವರು : ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರು

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | 01.08.2008ರ ನಂತರ ನೇರ ನೇಮಕಾತಿ ಹೊಂದಿದ ಸರ್ಕಾರಿ / ಅನುದಾನಿತ ಪ್ರೌಢಶಾಲಾ ಶಿಕ್ಷಕರು/ಮುಖ್ಯೋಪಾಧ್ಯಾಯರು ಹಾಗೂ ಪದವಿ ಪೂರ್ವ ಕಾಲೇಜು ಉಪನ್ಯಾಸಕರಿಗೆ ವಿಶೇಷ ಭತ್ಯೆಯಿಂದ ವಂಚಿತರಾದವರಿಗೆ ವೇತನ ತಾರತಮ್ಯ ಸರಿಪಡಿಸಲು ಒಂದು ವಾರ್ಷಿಕ ಬಡ್ತಿ ನೀಡಲು ಕೈಗೊಂಡ ಕ್ರಮಗಳೇನು; | ಸರ್ಕಾರದ ಆದೇಶ ಸಂಖ್ಯೆ: ಇಡಿ 255 ಎಸ್ಎಲ್‌ಬಿ 2016 ದಿನಾಂಕ:23/07/2018ರನ್ವಯ ದಿನಾಂಕ:01/08/2008ರ ನಂತರ ಪ್ರೌಢಶಾಲೆಗಳಿಗೆ ನೇಮಕಗೊಂಡು ಕರ್ತವ್ಯಕ್ಕೆ ಹಾಜರಾದ ಶಿಕ್ಷಕರುಗಳಿಗೆ ವಿಶೇಷ ಭತ್ಯೆ ನೀಡಲು ಅವಕಾಶವಿರುವುದಿಲ್ಲ. |
| ಆ) | ಸದರಿ ಸರ್ಕಾರಿ / ಅನುದಾನಿತ ಪ್ರೌಢಶಾಲಾ ಶಿಕ್ಷಕರು / ಮುಖ್ಯೋಪಾಧ್ಯಾಯರು ಹಾಗೂ ಪದವಿ ಪೂರ್ವ ಕಾಲೇಜು ಉಪನ್ಯಾಸಕರಿಗೆ ವಿಶೇಷ ಭತ್ಯೆ ನ್ಯಾಯಯುತವಾಗಿ ನೀಡಬೇಕೆಂದು ಕೆಎಟಿ, ಸರ್ವೋಚ್ಚ ನ್ಯಾಯಾಲಯದ ತೀರ್ಪು ಇದ್ದರೂ ನ್ಯಾಯ ನೀಡಲು ವಿಳಂಬಕ್ಕೆ ಕಾರಣಗಳೇನು; | ಮಾನ್ಯ ನ್ಯಾಯಾಲಯ ಮತ್ತು ಮಾನ್ಯ ಕರ್ನಾಟಕ ಆಡಳಿತ ನ್ಯಾಯಮಂಡಳಿಯಿಂದ ದಿನಾಂಕ:01/08/2008ರ ನಂತರ ನೇಮಕಾತಿಗೊಂಡ ಶಿಕ್ಷಕರು ಹಾಗೂ ಉಪನ್ಯಾಸಕರುಗಳಿಗೆ ವಿಶೇಷ ಭತ್ಯೆ ನೀಡುವುದು ಸಮಂಜಸ ಎಂದು ಯಾವುದೇ ಪ್ರಕರಣಗಳಲ್ಲಿ ತೀರ್ಪು ನೀಡಿರುವುದಿಲ್ಲ. ಆದ್ದರಿಂದ ಇಂತಹ ತೀರ್ಪು ನೀಡಿರುವ ಬಗ್ಗೆ ಗಮನಕ್ಕೆ ಬಂದಿರುವುದಿಲ್ಲ. |
| ಇ) | ಈ ಸರ್ಕಾರಿ / ಅನುದಾನಿತ ಪ್ರೌಢಶಾಲಾ ಶಿಕ್ಷಕರು / ಮುಖ್ಯೋಪಾಧ್ಯಾಯರು ಹಾಗೂ ಪದವಿ ಪೂರ್ವ ಕಾಲೇಜು ಉಪನ್ಯಾಸಕರು ಪಡೆದ ವಿಶೇಷ ಭತ್ಯೆ ಮೊತ್ತವನ್ನು ಮರು ವಸೂಲಿ ಮಾಡಲು ಆದೇಶಗಳ ಮೂಲಕ ಒತ್ತಡ ಹಾಕಲಾಗುತ್ತಿರುವುದು ನಿಜವೇ; | ಭಾರತದ ಲೆಕ್ಕ ನಿಯಂತ್ರಕರು ಮತ್ತು ಮಹಾಲೆಕ್ಕಪರಿಶೋಧಕರ ವರದಿ, ಸ್ಥಳೀಯ ಸಂಸ್ಥೆಗಳು, ಇವರ ಮಾರ್ಚ್ 2017ಕ್ಕೆ ಕೊನೆಗೊಂಡ ವರದಿಯ ಕಂಡಿಕೆ 2.1ರಲ್ಲಿ ಸರ್ಕಾರದ ಆದೇಶಗಳಿಗೆ ವಿರುದ್ಧವಾದ ಬಟವಾಡೆ ಅಧಿಕಾರಿಗಳು ದಿನಾಂಕ:01/08/2008ರ ನಂತರ ನೇಮಕಗೊಂಡ ಶಿಕ್ಷಕರುಗಳಿಗೆ ವಿಶೇಷ ಭತ್ಯೆಯನ್ನು ಪಾವತಿಸಿದ್ದು, ಸದರಿ ಮೊತ್ತವನ್ನು (ಪ್ರಾಥಮಿಕ ರೂ. 1.27 ಮತ್ತು ರೂ. ಪ್ರೌಢ-5.13 ಕೋಟಿ) ಸಂಬಂಧಿಸಿದ ಶಿಕ್ಷಕರಿಂದ ವಸೂಲಿಯ ಕುರಿತು ಆಕ್ಷೇಪಣೆಯಲ್ಲಿಟ್ಟಿರುತ್ತಾರೆ. ಆಕ್ಷೇಪಣೆಯಂತೆ ಕ್ರಮವಹಿಸಲಾಗುತ್ತಿದೆ. |
| ಈ) | ಕೆಎಟಿ, ಸರ್ವೋಚ್ಚ ನ್ಯಾಯಾಲಯದಿಂದ ಸಿ ಮತ್ತು ಡಿ ದರ್ಜೆ ನೌಕರರಿಗೆ ಒಮ್ಮೆ ಪಾವತಿಸಿದ ವೇತನ ಭತ್ಯೆಗಳನ್ನು ಮರು ವಸೂಲಿ ಮಾಡುವಂತಿಲ್ಲ ಎಂಬ ತೀರ್ಪು ಇದ್ದರೂ ಸದರಿ | ಕೆ.ಎ.ಟಿ ಅರ್ಜಿ ಸಂಖ್ಯೆ:562-63/2017ರ ತೀರ್ಪು ದಿನಾಂಕ:29/09/2018ರಲ್ಲಿ "ಸಿ" & "ಡಿ" ಗುಂಪಿನ ಸಿಬ್ಬಂದಿಯಿಂದ ಹೆಚ್ಚುವರಿಯಾಗಿ ನೀಡಿರುವ ಮೊಬಲಗು ವಸೂಲಿ ಮಾಡಬಾರದೆಂದು ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿನ ಪ್ರಕರಣ (STATE OF PUNJAB VS. RAGIQ MASIH (WHITE WASHER), (2015 AIR |

| | | |
|---|---|---|
| | ನೌಕರರಿಂದ ಮರು ವಸೂಲಿ ಮಾಡಲು ಒತ್ತಡ, ವೇತನ ನಿಲುಗಡೆ ಹಾಗೂ 10, 15 ವರ್ಷಗಳ ಕಾಲಮಿತಿ ವೇತನ ಬಡ್ತಿಗಳನ್ನು ತಡೆಹಿಡಿಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ? | SCW 501) ತೀರ್ಪು ಉಲ್ಲೇಖಿಸಿ ತೀರ್ಪು ನೀಡಿರುತ್ತದೆ. ನ್ಯಾಯಾಲಯದ ತೀರ್ಪು ಸರ್ಕಾರದ ಗಮನಕ್ಕೆ ಬಂದಿರುತ್ತದೆ.<br>ಅದರಂತೆ ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರ ಪತ್ರದಲ್ಲಿ ದಿನಾಂಕ:05/02/2020ರ ದಿನಾಂಕ:01/08/2008ರ ನಂತರ ನೇಮಕಗೊಂಡ ಸರ್ಕಾರಿ ಪ್ರೌಢಶಾಲಾ ಸಹ ಶಿಕ್ಷಕರುಗಳಿಗೆ ಸರ್ಕಾರದ ಆದೇಶಗಳನ್ನು ಉಲ್ಲಂಘಿಸಿ ನಿಯಮಬಾಹಿರವಾಗಿ ಪಾವತಿಸಿರುವ ಮೊತ್ತವನ್ನು ಸಂಬಂಧಪಟ್ಟ ಬಟವಾಡೆ ಅಧಿಕಾರಿಗಳಿಂದ ವಸೂಲಿ ಮಾಡಿ ಸರ್ಕಾರದ ಲೆಕ್ಕ ಶೀರ್ಷಿಕೆಗೆ ಜಮೆ ಮಾಡಲು ತಿಳಿಸಿದೆ.<br>ನೌಕರರಿಂದ ಮರು ವಸೂಲಿ ಮಾಡಲು ಒತ್ತಡ, ವೇತನ ನಿಲುಗಡೆ ಹಾಗೂ 10, 15 ವರ್ಷಗಳ ಕಾಲಮಿತಿ ವೇತನ ಬಡ್ತಿಗಳನ್ನು ತಡೆಹಿಯುವಂತೆ ಯಾವುದೇ ಆದೇಶ / ನಿರ್ದೇಶನ ನೀಡಿರುವುದಿಲ್ಲ. |

ಸಂಖ್ಯೆ: ಇಪಿ 68 ಎಸ್‌ಎಲ್‌ಬಿ 2021

(ಎಸ್. ಸುರೇಶ್ ಕುಮಾರ್)
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ
ಸಕಾಲ ಸಚಿವರು